# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 612 (109)
2) ಸದಸ್ಯರ ಹೆಸರು : ಶ್ರೀ ಜಿ.ರಘು ಆಚಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3) ಉತ್ತರಿಸುವ ದಿನಾಂಕ : 24.07.2019
4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿತ್ರದುರ್ಗ ಜೋಗಿಮಟ್ಟಿಯಲ್ಲಿರುವ ಆಡುಮಲ್ಲೇಶ್ವರ ಮೃಗಾಲಯ ಅಭಿವೃದ್ಧಿಗೆ ಅರಣ್ಯ ಇಲಾಖೆ ಕೈಗೊಂಡಿರುವ ಕ್ರಮಗಳೇನು; (ಮಾಹಿತಿ ನೀಡುವುದು) | ಚಿತ್ರದುರ್ಗ ವಿಭಾಗದ ಆಡುಮಲ್ಲೇಶ್ವರ ಕಿರು ಮೃಗಾಲಯವು ದಿನಾಂಕ: 18/9/2017 ರಿಂದ ಕರ್ನಾಟಕ ಮೃಗಾಲಯ ಪ್ರಾಧಿಕಾರ, ಮೈಸೂರು ರವರ ಆಡಳಿತ ವ್ಯಾಪ್ತಿಗೆ ಒಳಪಟ್ಟಿರುತ್ತದೆ.<br>ಆಡುಮಲ್ಲೇಶ್ವರ ಕಿರು ಮೃಗಾಲಯದ ಮಾಸ್ಟರ್ ಲೇಔಟ್ ಪ್ಲಾನ್ ಕೇಂದ್ರಿಯ ಮೃಗಾಲಯ ಪ್ರಾಧಿಕಾರ, ನವದೆಹಲಿ ರವರಿಂದ ಅನುಮೋದನೆಯಾಗಿರುತ್ತದೆ.<br>ಆಡುಮಲ್ಲೇಶ್ವರ ಕಿರು ಮೃಗಾಲಯದಲ್ಲಿ ಚಿರತೆ, ಕರಡಿ, ಜೀಬ್ರಾ, ಜಿಂಕೆ ಮತ್ತು ಕೃಷ್ಣಮೃಗಗಳಿಗೆ ಹೊಸ ಆವರಣವನ್ನು ನಿರ್ಮಿಸಲು ಪ್ರಸ್ತಾಪಿಸಲಾಗಿದೆ. ಮೃಗಾಲಯದ ಸುತ್ತಾ ಚೈನ್‌ಲಿಂಕ್ ಮೆಷ್ ಫೆನ್ಸ್ ಅಳವಡಿಸುವ ಕಾಮಗಾರಿ ಚಾಲ್ತಿಯಲ್ಲಿರುತ್ತವೆ. |
| ಆ) | ಇಲ್ಲಿಗೆ ಆಗಮಿಸುವ ಪ್ರವಾಸಿಗರಿಗೆ ಮೂಲ ಸೌಕರ್ಯ ಇಲ್ಲದೆ ತೊಂದರೆಗೀಡಾಗಿರುವುದು ಸರ್ಕಾರದ ಗಮನಕ್ಕೆ ಬಂದಿಲ್ಲವೆ; ಹಾಗಿದ್ದಲ್ಲಿ ಅದನ್ನು ನಿವಾರಿಸಲು ಕೈಗೊಂಡಿರುವ ಕ್ರಮಗಳೇನು? (ಮಾಹಿತಿ ಒದಗಿಸುವುದು) | ಆಡುಮಲ್ಲೇಶ್ವರ ಕಿರು ಮೃಗಾಲಯಕ್ಕೆ ಭೇಟಿ ನೀಡುವ ಪ್ರವಾಸಿಗರಿಗೆ ಈ ಕೆಳಕಂಡ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲಾಗಿದೆ.<br>1. ಕುಡಿಯುವ ನೀರಿನ ವ್ಯವಸ್ಥೆ.<br>2. ಎರಡು ಪ್ರತ್ಯೇಕ ಶೌಚಾಲಯ ವ್ಯವಸ್ಥೆ.<br>3. ಮಕ್ಕಳಿಗೆ ಆಟದ ಮೈದಾನ.<br>4. ಪ್ರವಾಸಿಗರಿಗೆ ತಂಗುದಾಣದ ವ್ಯವಸ್ಥೆ.<br>ಹೆಚ್ಚುವರಿಯಾಗಿ ಸೌಲಭ್ಯಗಳನ್ನು ಒದಗಿಸಲು 2019-20ರ ಕ್ರಿಯಾಯೋಜನೆಯಲ್ಲಿ ಕರ್ನಾಟಕ ಮೃಗಾಲಯ ಪ್ರಾಧಿಕಾರ, ಮೈಸೂರು ರವರಿಂದ ಮಂಜೂರಾತಿ ದೊರತಿದೆ. |

ಸಂಖ್ಯೆ: ಅಪಜೀ 43 ಎಫ್‌ಪಿಸಿ 2019

**(ಸತೀಶ್ ಎಲ್. ಜಾರಕಿಹೊಳಿ)**
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು